## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2155

ಮಾನ್ಯ ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 25.03.2021

ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎನ್.ಪಿ.ಎಸ್. ಯೋಜನೆ ಜಾರಿಗೆ ಬಂದಾಗಿನಿಂದ ಎಷ್ಟು ನೌಕರರು ಇದಕ್ಕೆ ಒಳಪಟ್ಟಿರುತ್ತಾರೆ, ಈ ಯೋಜನೆಗೆ ಒಳಪಟ್ಟು ಎಷ್ಟು ನೌಕರರು ನಿವೃತ್ತಿ ಹೊಂದಿರುತ್ತಾರೆ; ನಿವೃತ್ತಿ ಹೊಂದುವ ಸಮಯದಲ್ಲಿ ಇವರ ಎನ್.ಪಿ.ಎಸ್. ಖಾತೆಯಲ್ಲಿದ್ದ ಮೊತ್ತವೆಷ್ಟು; ಈ ಖಾತೆಯಿಂದ ನಿವೃತ್ತಿ ಸಂದರ್ಭದಲ್ಲಿ ನೌಕರರಿಗೆ ಪಾವತಿಸಿದ ಮೊತ್ತವೆಷ್ಟು; ಬಾಕಿ ಉಳಿದ ಮೊತ್ತದಿಂದ ಮಾಹೆಯಾನ ಎಷ್ಟು ಹಣವನ್ನು ಪಿಂಚಣಿಯಾಗಿ ನೀಡಲಾಗುತ್ತದೆ; (ಇಲಾಖಾವಾರು ವಿವರ ನೀಡುವುದು) | ನೂತನ ಪಿಂಚಣಿ ಯೋಜನೆಗೆ ಒಳಪಟ್ಟು ದಿನಾಂಕ: 01.03.2021ಕ್ಕೆ ನೋಂದಣಿ ಯಾಗಿರುವ ನೌಕರರ ಸಂಖ್ಯೆ 2,41,672.<br><br>ನೂತನ ಪಿಂಚಣಿ ಯೋಜನೆಯಡಿ ನೌಕರರು ನಿವೃತ್ತರಾಗುವ ಸಮಯದಲ್ಲಿ ಪ್ರಾನ್ ಖಾತೆಯಲ್ಲಿ 2.00 ಲಕ್ಷಕ್ಕಿಂತ ಕಡಿಮೆ ಮೊತ್ತವಿದ್ದರೆ ಸಂಪೂರ್ಣ ಮೊತ್ತವನ್ನು ನೌಕರರಿಗೆ ಕೇಂದ್ರ ನಿಯಂತ್ರಣ ಪ್ರಾಧಿಕಾರ (Central Regulatory Authority) ರವರಿಂದ ಹಿಂದಿರುಗಿಸಲಾಗುವುದು. ಪ್ರಾನ್ ಖಾತೆಯಲ್ಲಿ 2.00 ಲಕ್ಷಕ್ಕಿಂತ ಹೆಚ್ಚಿನ ಮೊತ್ತವಿದ್ದರೆ ಪ್ರಾನ್ ಖಾತೆಯಲ್ಲಿನ ಶೇ.60% ರಷ್ಟು ಮೊತ್ತವನ್ನು ನೌಕರರಿಗೆ ಹಿಂದಿರುಗಿಸಲಾಗುವುದು ಹಾಗೂ ಉಳಿದ ಶೇ.40% ರಷ್ಟು ಮೊತ್ತವು Annuity Service Provider (ASP) ಯಲ್ಲಿ ಹೂಡಿಕೆ ಮಾಡಿ ಮಾಸಿಕ ಪಿಂಚಣಿ ನೀಡಲಾಗುತ್ತಿದೆ.<br><br>ನೌಕರರು ನಿವೃತ್ತಿ ಹೊಂದುವ ಸಮಯದಲ್ಲಿ ಪ್ರಾನ್ ಖಾತೆಯಲ್ಲಿ ಶೇಖರಣೆಗೊಂಡಿರುವ ಮೊತ್ತದಲ್ಲಿ ಶೇ.60% ರಷ್ಟು CRA ರವರಿಂದ ಇತ್ಯರ್ಥಪಡಿಸಿರುವ ಮೊತ್ತದ ವಿವರ ಹಾಗೂ ಶೇ. 40 ರಷ್ಟು Annuity Service Provider ಹೂಡಿಕೆ ಮಾಡಿರುವ ಮೊತ್ತದ ವಿವರದ ತಃಖ್ತೆಯನ್ನು ಅನುಬಂಧದಲ್ಲಿ ಲಗತ್ತಿಸಿದೆ.<br><br>Annuity Service Provider ನಲ್ಲಿ ಹೂಡಿಕೆ ಮಾಡುವುದು ನೌಕರರ ಆಯ್ಕೆಯಾಗಿದ್ದು, ನೌಕರರು ಆಯ್ಕೆ ಮಾಡಿಕೊಳ್ಳುವ ASP ರವರಿಗೆ CRA ರವರಿಂದ ಶೇ. 40% ಮೊತ್ತವನ್ನು ಹೂಡಿಕೆ ಮಾಡಿದ ನಂತರ ASP ರವರಿಂದ ನೌಕರರಿಗೆ ಮಾಸಿಕ ಪಿಂಚಣಿ ನೀಡಲಾಗುತ್ತದೆ. ಎನ್.ಪಿ.ಎಸ್. ಮೊತ್ತವು ಹೂಡಿಕೆಯ ಮೇಲೆ ಅವಲಂಬಿಸಿದೆ. |

| | | |
|---|---|---|
| ಆ) | ಎನ್.ಪಿ.ಎಸ್. ಯೋಜನೆಯಡಿ ನಿವೃತ್ತಿ ಹೊಂದಿರುವ ನೌಕರರಿಗೆ ಪ್ರಸ್ತುತ ಪಿಂಚಣಿ ಎಷ್ಟು; ಅದೇ ನೌಕರರ ಓ.ಪಿ.ಎಸ್.ಗೆ ಒಳಪಟ್ಟಿದ್ದಲ್ಲಿ ಲಭ್ಯವಾಗುತ್ತಿದ್ದ ಪಿಂಚಣಿ ಎಷ್ಟು; (ವಿವರ ನೀಡುವುದು) | ಪ್ರಾನ್ ಖಾತೆಯಲ್ಲಿ ಶೇಖರಣೆಗೊಂಡಿರುವ ಮೊತ್ತದಲ್ಲಿ ಶೇ.60% ರಷ್ಟು ನೌಕರರಿಗೆ ಕೇಂದ್ರ ನಿಯಂತ್ರಣ ಪ್ರಾಧಿಕಾರ (Central Regulatory Authority) ರವರಿಂದ ಇತ್ಯರ್ಥಪಡಿಸಲಾಗುವುದು. ಉಳಿದ ಶೇ. 40 ರಷ್ಟು ಮೊತ್ತವನ್ನು ಕಡ್ಡಾಯವಾಗಿ Annuity Service Provider ಯಲ್ಲಿ ಹೂಡಿಕೆ ಮಾಡಿ ಮಾಸಿಕ ಪಿಂಚಣಿ ಪಡೆಯುತ್ತಾರೆ.<br><br>ಇದೇ ನೌಕರರು ಓ.ಪಿ.ಎಸ್. ಗೆ ಒಳಪಟ್ಟಿದ್ದಲ್ಲಿ ಲಭ್ಯವಾಗುವ ಪಿಂಚಣಿ ಮೊತ್ತವು ಪ್ರತಿಯೊಬ್ಬ ನೌಕರನ ಅರ್ಹತಾ ಸೇವಾವಧಿ ಹಾಗೂ ನಿವೃತ್ತಿ ಹೊಂದುವ ಸಮಯದಲ್ಲಿ ಪಡೆಯುತ್ತಿದ್ದ ಅಂತಿಮ ವೇತನ ಸಂದಾಯದ ವಿವರಗಳ ಮೇಲೆ ಅವಲಂಬಿತವಾಗಿರುತ್ತದೆ. |
| ಇ) | ಎನ್.ಪಿ.ಎಸ್. ಯೋಜನೆಯ ಸಂಬಂಧ ರಚಿಸಿರುವ ಸಮಿತಿಗೆ ವರದಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕಾಲಮಿತಿ ಏನು; ಈ ಸಮಿತಿಯಲ್ಲಿರುವ ಸದಸ್ಯರ ವಿವರ ನೀಡುವುದು; ಹಾಗೂ ಈ ಸಮಿತಿಯು ಇಲ್ಲಿಯವರೆಗೆ ನಡೆಸಲಾಗಿರುವ ಸಭೆಗಳೆಷ್ಟು? (ವಿವರ ನೀಡುವುದು) | ಸರ್ಕಾರವು ನೂತನ ಪಿಂಚಣಿ ಯೋಜನೆಗೆ ಸೂಕ್ತ ಬದಲಾವಣೆ / ಮಾರ್ಪಾಡು ಮಾಡಲು ಸರ್ಕಾರದ ಆದೇಶ ಸಂಖ್ಯೆ: ಆಇ 107 ಪಿಇಎನ್ 2018, ದಿನಾಂಕ: 11.12.2018 ರನ್ವಯ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ. |

| | | |
|---|---|---|
| 1 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | ಅಧ್ಯಕ್ಷರು |
| 2 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಸಿ.ಆ.ಸು.ಇ. (ಆಡಳಿತ ಸುಧಾರಣೆ | ಸದಸ್ಯರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆ ಮತ್ತು ಸಂ) | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾನೂನು ಇಲಾಖೆ | ಸದಸ್ಯರು |
| 5 | ಸರ್ಕಾರದ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ | ಸದಸ್ಯರು |
| 6 | ಸರ್ಕಾರದ ಕಾರ್ಯದರ್ಶಿ (ವೆಚ್ಚ), ಆರ್ಥಿಕ ಇಲಾಖೆ | ಸದಸ್ಯರು |

<table>
<tr><td></td><td></td><td>
<table>
<tr><td>7</td><td>ಸರ್ಕಾರದ ಜಂಟಿ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ)</td><td>ಸಂಚಾಲಕರು</td></tr>
</table>
<br>ಸಮಿತಿಯು ವರದಿ ಸಲ್ಲಿಸಲು ಕಾಲಾಮಿತಿಯನ್ನು ನಿಗಧಿಪಡಿಸಿರುವುದಿಲ್ಲ.<br><br>ಸಮಿತಿಯು ಇದುವರೆವಿಗೂ ಎರಡು ಸಭೆಯನ್ನು ನಡೆಸಿದೆ.
</td></tr>
</table>

ಆಇ 63 ಪಿಇಎನ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

## ಅನುಬಂಧ

### ಇಲಾಖಾವಾರು ನಿವೃತ್ತಿ ಹೊಂದಿರುವ ನೌಕರರ ಸಂಖ್ಯೆ ಹಾಗೂ ಇತ್ಯರ್ಥಪಡಿಸಿರುವ ಮೊತ್ತದ ವಿವರ

| ಇಲಾಖೆ | ಪ್ರ್ಯಾನ್ ಖಾತೆ ಹೊಂದಿರುವವರ ಸಂಖ್ಯೆ | ಶೇ. 60ರಷ್ಟು ಮೊತ್ತವನ್ನು ಹಿಂಪಡೆದ ವಿವರಗಳು | ಶೇ.40ರಷ್ಟು ಹಿಂಪಡೆದ ಮೊತ್ತ | ಶೇ. 100ರಷ್ಟು ಕಾರ್ಪಸ್ ಮೊತ್ತ | ಒಟ್ಟು ಮೊತ್ತ |
|---|---|---|---|---|---|
| ಆಡಳಿತ ತರಬೇತಿ ಸಂಸ್ಥೆ | 2 | 214213.95 | 151698.45 | 475988.94 | 841901.34 |
| ಕೃಷಿ ಇಲಾಖೆ | 8 | 2631984.24 | 1829087.62 | 4461071.86 | 8922143.72 |
| ಆಯುಷ್ ಇಲಾಖೆ | 1 | 334990.11 | 230197.2 | 565187.31 | 1130374.62 |
| ಚೀಫ್ ಎಲೆಕ್ಟ್ರಿಕಲ್ ಇನ್ಸ್ಪೆಕ್ಟರೇಟ್ | 1 | 376090.33 | 250309.72 | 626400.05 | 1252800.1 |
| ಕಾನೂನು ಮೆಟ್ರೋಲಜಿ ನಿಯಂತ್ರಕರು | 1 | 307670.73 | 206033.34 | 513704.07 | 1027408.14 |
| ನ್ಯಾಯಾಲಯ | 5 | 1655870.68 | 1141096.75 | 3062015.1 | 5858982.53 |
| ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | 3 | 2100412.47 | 1417206.29 | 3517618.76 | 7035237.52 |
| ಶಿಕ್ಷಣ ಇಲಾಖೆ | 273 | 104150428.2 | 70710891.69 | 178545327.2 | 353406647 |
| ಉದ್ಯೋಗ ಮತ್ತು ತರಬೇತಿ ಇಲಾಖೆ | 7 | 1132411.12 | 821971.59 | 2336761.14 | 4291143.85 |
| ಮೀನುಗಾರಿಕೆ ಇಲಾಖೆ | 1 | 259814.35 | 183450.16 | 443264.51 | 886529.02 |
| ಅರಣ್ಯ ಇಲಾಖೆ | 5 | 1065261.82 | 724295.77 | 1980528.87 | 3770086.46 |
| ಸರ್ಕಾರಿ ಮುದ್ರಣಾಲಯ | 1 | 389188.14 | 261028.58 | 650216.72 | 1300433.44 |
| ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | 24 | 9705649.96 | 6633796.86 | 16887901.5 | 33227348.32 |
| ತೋಟಗಾರಿಕೆ ಇಲಾಖೆ | 2 | 705099.53 | 481571.32 | 1186670.85 | 2373341.7 |
| ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆ | 2 | 336202.62 | 106239.24 | 442441.86 | 884883.72 |
| ಎನ್.ಸಿ.ಸಿ. | 4 | 2402753.16 | 1638522.46 | 4041275.62 | 8082551.24 |
| ಪೊಲೀಸ್ | 10 | 6182488.51 | 4135345.69 | 10317834.2 | 20635668.4 |
| ಲೋಕೋಪಯೋಗಿ ಇಲಾಖೆ | 6 | 1718258.54 | 1222314.04 | 2940572.58 | 5881145.16 |

| | | | | | |
|---|---|---|---|---|---|
| ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | 240 | 39970714.99 | 27646727.31 | 80878234.28 | 148495676.6 |
| ಕಂದಾಯ ಇಲಾಖೆ | 4 | 1419493.12 | 975872.74 | 2395365.86 | 4790731.72 |
| ರೇಷ್ಮೆ ಇಲಾಖೆ | 3 | 745644.62 | 505176.02 | 1250820.64 | 2501641.28 |
| ಸಮಾಜ ಕಲ್ಯಾಣ ಇಲಾಖೆ | 5 | 191875.48 | 127116.16 | 723290.35 | 1042281.99 |
| ರಾಜ್ಯ ಲೆಕ್ಕಪರಿಶೋಧನಾ ಇಲಾಖೆ | 1 | | | 175339.73 | 175339.73 |
| ಖಜಾನೆ ಇಲಾಖೆ | 1 | 340507.55 | 227732.42 | 568239.97 | 1136479.94 |
| ಪಶುಸಂಗೋಪನಾ ಇಲಾಖೆ | 2 | 713569.04 | 486752.61 | 1200321.65 | 2400643.3 |
| ಜಲನಯನ ಅಭಿವೃದ್ಧಿ ಇಲಾಖೆ | 3 | 678797.35 | 470503.7 | 1190102.56 | 2339403.61 |
| ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ | 12 | 2926359.45 | 2012873.58 | 4939233.03 | 9878466.06 |
| **ಒಟ್ಟು** | **627** | **182655750.00** | **124597811.30** | **326315729.20** | **633569290.50** |